# ಅಭಿವ್ಯಕ್ತಿಶೀಲ ಕಲಾ ಪ್ರಕಾರಗಳು | ಶಿಕ್ಷಕರಿಗಾಗಿ ಪರಿಕರಗಳು

ಮಹಿಮಾ ರಸ್ತೋಗಿ

'ನಿಮಗೆ ಯಾವುದೇ ವಿಷಯದ ಬಗ್ಗೆ ಮಾತನಾಡುವ ಸ್ವಾತಂತ್ರ್ಯ ಸಿಕ್ಕರೆ ನೀವು ಏನು ಮಾತನಾಡಲು ಬಯಸುತ್ತೀರಿ?'

'ನಾನು ಕಿರುಚುತ್ತೇನೆ'. ತುಂಬಾ ಜೋರಾಗಿ, ಮತ್ತೆ ನನ್ನನ್ನು ಯಾರೂ ತಡೆಯಬಾರದು!'

ಉತ್ತರಾಖಂಡದ ಸರ್ಕಾರಿ ಪ್ರಾಥಮಿಕ ಶಾಲೆಯೊಂದರಲ್ಲಿ ಕಥೆ ಓದುವ ಅವಧಿಯಲ್ಲಿ ನಾವು I WISH/ MERI ARZOO (ಐ ವಿಶ್/ಮೇರಿ ಆರ್ಜೂ) ಎಂಬ ದ್ವಿಭಾಷೀಯ ಕತೆಯನ್ನು ಓದುತ್ತಿದ್ದೆವು. ಏನನ್ನಾದರೂ ಕೇಳುವ ಸ್ವಾತಂತ್ರ್ಯ ಪಡೆದಿದ್ದ ಸುಮಾರು ಹದಿನಾರು ಮಕ್ಕಳು ತಮ್ಮ ಬಯಕೆಗಳನ್ನು ಹಂಚಿಕೊಳ್ಳುತ್ತಿದ್ದರು. ಕಥೆಯನ್ನು ಬೆಳೆಸುತ್ತಾ, ಸುಗಮಕಾರಳಾಗಿ (facilitator) ನಾನು ನನ್ನ ವಿದ್ಯಾರ್ಥಿಗಳ ಇಚ್ಛೆ ಏನು ಎಂದು ಕೇಳಿದಾಗ, ಒಂದು ಮಗು ಮೇಲಿನಂತೆ ಉತ್ತರಿಸಿತು.

ಕಿರುಚಬೇಕು ಎಂಬ ಈ ಇಚ್ಛೆಗೆ ಹಲವು ಕಾರಣಗಳಿರಬಹುದು, ಅದು ವಿದ್ಯಾರ್ಥಿಗಳು ಗಲಾಟೆ ಎಬ್ಬಿಸಲಿರಬಹುದು, ತೊಂದರೆ ಉಂಟು ಮಾಡಲಿರಬಹುದು ಅಥವಾ ಸುಪ್ತ ಭಾವನೆಗಳನ್ನು ವ್ಯಕ್ತಪಡಿಸಲಿರಬಹುದು. ಇಲ್ಲವೇ ಅದುಮಿಟ್ಟುಕೊಂಡ ಬಯಕೆಯೋ ಅಥವಾ ಹಿಂಸೆ ಮತ್ತು ನಿಂದನೆಯ ಒಂದು ಅನುಭವವೂ ಆಗಿರಬಹುದು. ಆಗ ನನಗೆ ಏನೂ ಹೊಳೆಯಲಿಲ್ಲ.

ಆ ಬಳಿಕ ಇದಕ್ಕಾಗಿ ಪ್ರತ್ಯೇಕ ಅವಧಿಯನ್ನು ತೆಗೆದುಕೊಂಡು ಈ ಅಭಿವ್ಯಕ್ತಿಯ ಬಗ್ಗೆ ಸ್ಪಷ್ಟತೆಯನ್ನು ಪಡೆಯಬೇಕು ಎಂದು ನಿರ್ಧರಿಸಿದೆ. ಕಾರಣವನ್ನು ಕಂಡುಕೊಳ್ಳಲು ಅಥವಾ ಸಮಸ್ಯೆಯನ್ನು ಬಗೆಹರಿಸಲು ಯಾವಾಗಲೂ ಸಾಧ್ಯವಾಗದೇ ಇರಬಹುದು, ಆದರೆ ಒಬ್ಬ ಶಿಕ್ಷಕಿ/ ಸುಗಮಕಾರಳಾಗಿ ತರಗತಿಯಲ್ಲಿ ಮಕ್ಕಳು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು 'ಸುರಕ್ಷಿತ ಅವಕಾಶ' ಮಾಡಿಕೊಡಬೇಕು. ಸಂಜನಾ ಕಪೂರ್ ಅವರು ಬರೆದ `Who Stole Bhaiya's Smile?' ಎಂಬ ಕತೆ ಹಾಗೂ ಕೆಲವು ದೃಶ್ಯ ಕಲೆಯ ಅಂಶಗಳನ್ನು ಆಧರಿಸಿ ನಾನು 'ಅಭಿವ್ಯಕ್ತಪಡಿಸುವುದು' ಎಂಬ ಪ್ರತ್ಯೇಕ ಅವಧಿಯನ್ನೇ (ಪಾಠ ಯೋಜನೆ 1) ಸಿದ್ಧಪಡಿಸಿದೆ.

## ಪಾಠ ಯೋಜನೆ: ಭಾವನೆಗಳನ್ನು ವ್ಯಕ್ತಪಡಿಸುವುದು

**ಉದ್ದೇಶ:** ವಿದ್ಯಾರ್ಥಿಗಳಿಗೆ ತಮ್ಮ ಕಲ್ಪನೆಗಳು, ಕನಸುಗಳು ಮತ್ತು ಆಯ್ಕೆಗಳ ಬಗ್ಗೆ ಮುಕ್ತವಾಗಿ ಮಾತನಾಡಲು ಅವಕಾಶ ಮಾಡಿಕೊಡುವುದು.

ತರಗತಿಗಳು: 4, 5 (ವಯಸ್ಸು: 9–10 ವರ್ಷಗಳು)

ಅವಧಿ: ಒಂದು ಗಂಟೆ

ಕಲಾ ಪ್ರಕಾರ: ಕತೆ ಹೇಳುವುದು

| | ಚಟುವಟಿಕೆ | ನಿರ್ವಹಣೆ | ಫಲಿತ |
|---|---|---|---|
| ವೃತ್ತ | ಇವತ್ತು ನಿನಗೆ ಹೇಗೆ ಅನಿಸುತ್ತಿದೆ? ಭಾವನೆಯನ್ನು ಹೆಸರಿಸುವುದು | ಮಕ್ಕಳನ್ನು ವೃತ್ತಾಕಾರವಾಗಿ ಕೂರಿಸಿ; ಪ್ರಶ್ನೆ ಕೇಳಿ; ಸುಗಮಕಾರರು ಮೊದಲು ತಮ್ಮ ಭಾವನೆಯನ್ನು ಎಲ್ಲರ ಬಳಿ ಹಂಚಿಕೊಳ್ಳಬೇಕು, ನಂತರ ಮಕ್ಕಳನ್ನು ಒಬ್ಬರ ನಂತರ ಒಬ್ಬರು ಉತ್ತರಿಸುವಂತೆ ಉತ್ತೇಜಿಸಬೇಕು. | ತಮ್ಮ ಭಾವನೆ ಏನು ಎಂದು ಯೋಚಿಸಲು ಮಕ್ಕಳು ಕಾಲಾವಕಾಶ ತೆಗೆದುಕೊಳ್ಳುತ್ತಾರೆ ಮತ್ತು ಆ ಭಾವನೆಯನ್ನು ಹೆಸರಿಸುತ್ತಾರೆ. |

| | ಚಟುವಟಿಕೆ | ನಿರ್ವಹಣೆ | ಫಲಿತ |
|---|---|---|---|
| ಸಿದ್ಧಗೊಳ್ಳುವುದು | ಅವರ ಮುಂದೆ ಬಣ್ಣದ (ಕ್ರೆಯಾನ್‌ಗಳು, ಕಲರ್ ಪೆನ್ಸಿಲ್‌ಗಳು, ಸ್ಕೆಚ್‌ಪೆನ್‌ಗಳು ತೈಲವರ್ಣದ ಬಿಲ್ಲೆಗಳು – ಲಭ್ಯವಿರುವ ಎಲ್ಲಾ ಒಣಗಿದ ವರ್ಣದ್ರವ್ಯಗಳನ್ನು ಸಹ ಒದಗಿಸಬಹುದು) ವಸ್ತುಗಳನ್ನಿಡಬಹುದು. ಯಾವ ಬಣ್ಣಗಳು ಲಭ್ಯವಿವೆ ಎಂಬುದರ ಮೇಲೆ ಇದು ಅವಲಂಬಿತವಾಗಿದೆ.<br><br>ಸುಗಮಕಾರರು ಈ ಕೆಳಗಿನ ಎಲ್ಲಾ ಭಾವನೆಗಳನ್ನೆತ್ತಿಕೊಂಡು ಪ್ರಶ್ನೆಗಳನ್ನು ಕೇಳಬೇಕು:<br>– ಸಂತೋಷ<br>– ಪ್ರಶಾಂತ<br>– ಪ್ರೀತಿ<br>– ಜಿಗುಪ್ಸೆ<br>– ಕೋಪ | ಸರಣಿಯಲ್ಲಿ ಬರುವ ಪ್ರತಿ ಪ್ರಶ್ನೆಗೂ, ಒಂದೊಂದು ಬಣ್ಣವನ್ನು ಆಯ್ದುಕೊಂಡು ಅದರ ಬಗ್ಗೆ ಏನು ಅನಿಸುತ್ತದೆ ಎಂದು ಬರೆಯಲು/ ಚಿತ್ರ ಬಿಡಿಸಲು ತಿಳಿಸಿ. | ಮಕ್ಕಳು ಭಾವನೆಗಳೊಂದಿಗೆ ಬಣ್ಣಗಳನ್ನು ಬೆಸೆಯಲು ಕಲಿಯುತ್ತಾರೆ. |
| ರಚನೆ | ಸಂಜನಾ ಕಪೂರ್ ಬರೆದ ಹೂ ಸ್ಟೋಲ್ ಭಯ್ಯಾಸ್ ಸ್ಮೈಲ್? ಪುಸ್ತಕ ಓದಿ. | ಪುಸ್ತಕದಲ್ಲಿನ ಒಂದು ಭಾವನೆಯನ್ನು ಮತ್ತು ರಾಕ್ಷಸನ ಚಿತ್ರವನ್ನು ಉಲ್ಲೇಖಿಸುವಾಗ, ಭಾವನೆಯನ್ನು ಬಿಂಬಿಸುವ ಬಣ್ಣದಲ್ಲಿಯೇ ಚಿತ್ರ ಬಿಡಿಸುವಂತೆ ಹೇಳಿ. ಭಾವನೆಯ ಬಗ್ಗೆ ಮಾತನಾಡುವಾಗ ನಕಾರಾತ್ಮಕತೆಯಿಂದ ಸಕಾರಾತ್ಮಕತೆಯತ್ತ ಪ್ರಸಂಗವನ್ನು ವಿವರಿಸಬೇಕು.<br><br>ಉದಾಹರಣೆಗೆ:<br>• ನಿಮ್ಮ ರಾಕ್ಷಸ ಹೇಗೆ ಕಾಣುತ್ತಾನೆ?<br>• ನಿನ್ನ ಕೋಪ ಹೇಗೆ ಕಾಣಿಸುತ್ತಿದೆ?<br>• ನಿನ್ನ ಬೇಸರ/ದುಃಖವು ಹೇಗೆ ಕಾಣುತ್ತದೆ?<br>• ನಿನ್ನ ಸಮಸ್ಯೆಯನ್ನು ಯಾರೂ ಅರ್ಥ ಮಾಡಿಕೊಳ್ಳದೇ ಇದ್ದಾಗ ನಿನಗೆ ಏನು ಅನಿಸುತ್ತದೆ?<br>• ನೀನು ಬೇಸರದಲ್ಲಿದ್ದಾಗ ನಿನ್ನನ್ನು ಖುಷಿಪಡಿಸಲು ಯಾರಾದರೂ ಪ್ರಯತ್ನಿಸಿದರೆ ನಿನಗೆ ಹೇಗನಿಸುತ್ತದೆ?<br>• ನೀನು ಶಾಂತವಾಗಿದ್ದಾಗ ಹೇಗೆ ಕಾಣುತ್ತದೆ?<br>• ನೀನು ಖುಷಿಯಲ್ಲಿದ್ದಾಗ ಹೇಗೆ ಕಾಣುತ್ತದೆ? | ಆಯ್ಕೆಯ ಸ್ವಾತಂತ್ರ್ಯವು ವೈಯಕ್ತಿಕತೆಯ ಭಾವವನ್ನು ಹೊರತರುತ್ತದೆ ಹಾಗೂ ಮಕ್ಕಳಿಗೆ ತಮ್ಮ ಗುಂಪಿನಲ್ಲಿರುವ ಪ್ರತಿಯೊಬ್ಬರ ಖಾಸಗಿತನದ ಗೌರವದ ಪರಿಚಯಿಸುತ್ತದೆ.<br><br>ಅವರಿಗೆ ಯಾವ ಭಾವನೆಯನ್ನು ವ್ಯಕ್ತಪಡಿಸಲು ಕಷ್ಟವಾಗುತ್ತಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಅವರ ಕಲಾಕೃತಿಗಳ ಮೇಲೆ ಗಮನ ಕೊಡಿ. |
| ಮುಕ್ತಾಯ | ಈಗ ನಿನ್ನಲ್ಲಿ ಯಾವ ಭಾವನೆ ಇದೆ? | ಅವರು ಮಾತನಾಡದೇ ಇದ್ದರೆ ಮತ್ತು ಶುರು ಮಾಡದೇ ಇದ್ದರೆ ಒಂದು ಉದಾಹರಣೆ ಕೊಟ್ಟು ವಿವರಿಸಿ. ವೃತ್ತದಲ್ಲಿನ ಎಲ್ಲಾ ಮಕ್ಕಳು ಒಬ್ಬರಾದ ಮೇಲೆ ಒಬ್ಬರು ಉತ್ತರಿಸುತ್ತಾರೆ. | ಅವರ ಸ್ವಂತ ಭಾವನೆಗಳ ಮೇಲಿನ ಪರ್ಯಾಲೋಚನೆ |

ಈ ಅವಧಿಯು ಮಕ್ಕಳಿಗೆ ತಮ್ಮ ಭಾವನೆಗಳು ಮತ್ತು ಬಣ್ಣಗಳ ನಡುವೆ ನಂಟು ಬೆಸೆಯಲು ನೆರವಾಗಿದ್ದಲ್ಲದೆ, ತಮ್ಮ ಅವ್ಯಕ್ತ ಭಾವನೆಗಳನ್ನು ವ್ಯಕ್ತಪಡಿಸಲು ಒಂದು ಅವಕಾಶವನ್ನು ಸೃಷ್ಟಿಸಿತು. ನಾವು ನಮ್ಮ ಭಾವನೆಗಳನ್ನು – ರಾಕ್ಷಸರು, ಕೋಪ, ಬೇಸರ, ಶಾಂತತೆ, ಕಾಳಜಿ, ಪ್ರೀತಿ ಮತ್ತು ಸಂತೋಷ– ಎಂದು ಚಿತ್ರಿಸಿದೆವು. ಪ್ರತಿಯೊಬ್ಬರೂ ಅವರವರ ಭಾವನೆಗಳಿಗೆ ವಿಭಿನ್ನ ವಿಚಾರಗಳನ್ನು ಮತ್ತು ಬಣ್ಣಗಳನ್ನು ಆಯ್ದುಕೊಂಡರು. ಪ್ರತಿಯೊಬ್ಬರೂ ವಿಭಿನ್ನ ವ್ಯಕ್ತಿಗಳು ಹಾಗೂ ವಿಭಿನ್ನ ಭಾವನೆಗಳು ಮತ್ತು ಅಭಿಪ್ರಾಯಗಳನ್ನು ಹೊಂದಿರುತ್ತಾರೆ ಎಂಬುದನ್ನು ಈ ಅವಧಿಯು ಅವರಿಗೆ ಕಲಿಸಿತು.

ಕಿರುಚಲು ಅಪೇಕ್ಷಿಸಿದ್ದ ವಿದ್ಯಾರ್ಥಿಯ ಮೇಲೆ ಈ ಅವಧಿಯು ಹೇಗೆ ಪರಿಣಾಮ ಬೀರಿತು? ಅವನು ಸಿಂಡರಿಸಿದ ಮುಖವನ್ನು ಚಿತ್ರಿಸಿ ತನ್ನ ಕೋಪವನ್ನು ವ್ಯಕ್ತಪಡಿಸಿ, ಅದುವೇ ತನ್ನ ರಾಕ್ಷಸ ಎಂದನು. ಅದನ್ನು ಚಿತ್ರಿಸಲು ಅವನು ಆರಿಸಿದ ಬಣ್ಣಗಳು, ತನ್ನ ಭಾವನೆಯ ಬಗ್ಗೆ ಅವನಿಗಿದ್ದ ಅರಿವು, ಉಪಶಮನಗೊಳ್ಳುವಿಕೆಯ ಮೊದಲ ಹೆಜ್ಜೆಯಾಗಿತ್ತು. ಬಣ್ಣ ಬಳಯುವ ಮತ್ತು ಅಭಿವ್ಯಕ್ತಪಡಿಸುವ ಪರಿಹಾರವನ್ನು ಅವನು ಕಂಡುಕೊಂಡ.



ಚಿತ್ರ 1: ಚಂಪಾವತ್‌ನ ರಂಗಕಾರ್‌ವಾನ್ ಕಲಿಕಾ ಕೇಂದ್ರದ ಅವಧಿಯಲ್ಲಿ ಮಕ್ಕಳು ಬಣ್ಣಗಳೊಂದಿಗೆ ಆಟವಾಡುತ್ತಿರುವುದು.




ಚಿತ್ರ 2: ಚಂಪಾವತ್‌ನ ಸಿಮಾಲ್ಟಾ ಎಂಬಲ್ಲಿನ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಮಕ್ಕಳು ಮತ್ತು ಸುಗಮಕಾರರು ದೈಹಿಕ ಚಲನೆಗಳೊಂದಿಗೆ ಅರಾಮದಾಯಕವಾಗಲು ಆಟದ ಮೂಲಕ ಸಜ್ಜುಗೊಳ್ಳುತ್ತಿರುವುದು.

## ನೀವು ಒಬ್ಬ ಶಿಕ್ಷಕಿ, ಅದು ನಿಮ್ಮಿಂದ ಸಾಧ್ಯ!

ಅಭಿವ್ಯಕ್ತಿ ಕಲೆಯು ನಾಟಕ, ಆಟ, ಚಲನೆ, ನಾಟಕಕತೆ ಹೇಳುವುದು, ಸಂಗೀತ ಮತ್ತು ದೃಶ್ಯ ಕಲೆಗಳಂತಹ ಸೃಜನಶೀಲ ಕಲಾ ಪ್ರಕಾರಗಳ ಚಿಕಿತ್ಸಕ ಸಂಯೋಜನೆಯಾಗಿದೆ. ತರಗತಿಯಲ್ಲಿ ಭಾವನೆಗಳ ಬಗ್ಗೆ ಮಾತನಾಡುವುದು ಮತ್ತು ಅದನ್ನು ವ್ಯಕ್ತಪಡಿಸಲು ಅವಕಾಶ ಮಾಡಿಕೊಡುವುದು ಬಹಳ ಮುಖ್ಯ. ಮಕ್ಕಳು ಯಾವುದಾದರೂ ಹೊಸ ಭಾವನೆಯನ್ನು ಅನುಭವಿಸಿದಾಗ ಸಾಮಾನ್ಯವಾಗಿ ಅದನ್ನು ವ್ಯಕ್ತಪಡಿಸಲು ಅವಕಾಶ ನೀಡಲಾಗುವುದಿಲ್ಲ. ಅಂತಹ ಭಾವನೆಗಳು, ಅವ್ಯಕ್ತವಾಗಿ ಉಳಿದರೆ, ಬೆದರಿಸುವಂತಹ (bullying) ನಕಾರಾತ್ಮಕವಾದ ಸಾಮಾಜಿಕ ವರ್ತನೆಗಳಿಗೆ ನಾಂದಿ–ಯಾಗುತ್ತದೆ. ಸೃಜನಶೀಲ ಕಲಾ ಪ್ರಕಾರಗಳು ಮೋಜಿಗಾಗಿ ಮತ್ತು ನಂಬಿಕೆ ಹುಟ್ಟಿಸಲು ಇರುವ ಅವಕಾಶ.

ಕಲಾಭಿವ್ಯಕ್ತಿಯ ಸಹಾಯದಿಂದ ಅವಧಿಗಳನ್ನು ಏರ್ಪಡಿಸಲು ಶಿಕ್ಷಕರು/ಸುಗಮಕಾರರು ವೃತ್ತಿಪರ ಕಲಾವಿದರಾಗಿರಬೇಕಾಗಿಲ್ಲ. ಅವರ ಪಾತ್ರವೇನಿದ್ದರೂ ಮಕ್ಕಳಲ್ಲಿನ ಸೃಜನಶೀಲತೆಯನ್ನು ವ್ಯಕ್ತಪಡಿಸಲು ಅವಕಾಶ ಸೃಷ್ಟಿಸುವುದಷ್ಟೇ. ಆಂಗಿಕ ಅಭಿನಯಗಳು, ಚಿತ್ರಕಲೆ ಮತ್ತು ಆಟವಾಡುವಾಗ ಅವರು ವಹಿಸುವ ಪಾತ್ರಗಳ ಮೇಲೆ ಅವರಲ್ಲಿನ ಬದಲಾವಣೆಗಳನ್ನು ಶಿಕ್ಷಕರು/ಸುಗಮಕಾರರು ಗಮನಿಸುವುದು ಅತ್ಯಗತ್ಯ. ಮುಂದಿನ ಅವಧಿಗಳನ್ನು ವಿನ್ಯಾಸ ಮಾಡುವಲ್ಲಿ ಈ ವಿವರಗಳು ತುಂಬಾ ನೆರವಾಗುತ್ತವೆ.

ಕಲಾಭಿವ್ಯಕ್ತಿಯಲ್ಲಿ ಶಿಕ್ಷಕರು / ಸುಗಮಕಾರರೂ ತಮ್ಮ ಭಾವನೆಗಳನ್ನು ಹಂಚಿಕೊಳ್ಳುವ ಮೂಲಕ ಅವಧಿಯಲ್ಲಿ ಪಾತ್ರ ವಹಿಸುವ ಕಾರಣ, ಅದು ಸಾಂಘಿಕ ಸಂಬಂಧವನ್ನು ಕಟ್ಟುವುದರ ಜತೆಗೆ, ಶಿಕ್ಷಕರು ಮತ್ತು ವಿದ್ಯಾರ್ಥಿಗಳ ನಡುವಿನ ಅಂತರವನ್ನು ಕಡಿಮೆ ಮಾಡುವ ಸೇತುವೆಯಾಗುತ್ತದೆ. ಇಲ್ಲಿ ಉಲ್ಲೇಖಿಸಲಾಗಿರುವ ಪಾಠದ ಅವಧಿಯಲ್ಲಿ, ವಿದ್ಯಾರ್ಥಿಗಳು ಬಗೆಬಗೆಯ ಅಭಿವ್ಯಕ್ತಿ ಹಾಗೂ ಬಣ್ಣಗಳ ಮೂಲಕ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿದರು. ಇದು, ಪ್ರತಿಯೊಬ್ಬರೂ ಇತರರಿಗಿಂತ ಭಿನ್ನ ಎಂಬುದನ್ನು ಅವರಿಗೆ ಮನವರಿಕೆ ಮಾಡಿಕೊಟ್ಟಿತು. ಇದು ಸ್ಪರ್ಧೆಗಿಂತ ಸಹಕಾರ ಮನೋಭಾವವನ್ನು ಉತ್ತೇಜಿಸುತ್ತದೆ. ಎಲ್ಲರೂ (ನನ್ನನ್ನೂ ಒಳಗೊಂಡು) ಬೇರೆಬೇರೆ ಸಮಯದಲ್ಲಿ ಬೇರೆಬೇರೆ ಭಾವನೆಗಳನ್ನು, ಬೇರೆಬೇರೆ ರೂಪದಲ್ಲಿ ಅನುಭವಿಸುತ್ತಾರೆ ಎಂಬುದು ಅವರಿಗೆ ಇದರಿಂದ ಮನವರಿಕೆಯಾಯಿತು. ಇದು ತರಗತಿಯಲ್ಲಿ ಕಾಳಜಿ ಮತ್ತು ಸಹಾನುಭೂತಿಯ ಸಂಸ್ಕಾರವನ್ನು ಹುಟ್ಟುಹಾಕುತ್ತದೆ.




**ಮಹಿಮಾ ರಸ್ತೋಗಿ** ಅವರು ಒಬ್ಬ ಕಲಾ ವೃತ್ತಿಪರರು ಮತ್ತು ಸುಗಮಕಾರರಾಗಿದ್ದು, ಮಕ್ಕಳು, ಯುವಜನರು ಮತ್ತು ಸಮುದಾಯದೊಂದಿಗೆ ಕೆಲಸ ಮಾಡುವುದನ್ನು ಇಷ್ಟಪಡುತ್ತಾರೆ. ಅವರು ದೃಶ್ಯ ಕಲೆಗಳು, ನಾಟಕ, ಕಥೆಗಳು, ಲಯ, ಆಟ, ಮತ್ತು ಚಲನೆಗಳ ಮೂಲಕ ಸಾಮಾಜಿಕ ಸಮನ್ವಯವನ್ನು ಸಾಧಿಸುತ್ತಾ, ಹೊಸ ಅನ್ವೇಷಣೆಗೆ ಮತ್ತು ತಮ್ಮನ್ನು ತಾವು ಅಭಿವ್ಯಕ್ತಿಪಡಿಸಿಕೊಳ್ಳುವಂತೆ ಜನರನ್ನು ಪ್ರೇರೇಪಿಸುತ್ತಾರೆ. ಓದುವುದು, ಪ್ರಯಾಣ, ರೇಖಾಚಿತ್ರ, ವಿನ್ಯಾಸ ಮತ್ತು ಅವಧಿಗಳನ್ನು ಸುಗಮಗೊಳಿಸುವುದು ಅವರಿಗೆ ಅಚ್ಚುಮೆಚ್ಚು. ಅವರನ್ನು mahimarastogi80@gmail.com ಮೂಲಕ ಸಂಪರ್ಕಿಸಬಹುದು.



ಅನುವಾದ: **ರೋಹಿಣಿ ಮುಂಡಾಜೆ** | ಪರಿಶೀಲನೆ: **ಲತಾ ಕೆ.ಸಿ.**